ಎ.ಜಯಂತಿ *

# ಗುಮ್ಮನಾಯಕನ ಪಾಳೆಯದ ಪಾಳೆಯಗಾರರ ಬಾಗೇಪಲ್ಲಿ ತಾಮ್ರಶಾಸನ

ಕೋಲಾರ ಜಿಲ್ಲೆಯ ಬಾಗೇಪಲ್ಲಿಯ ಶ್ರೀ ನಂಜುಡ ರೆಡ್ಡಿ ಯವರಲಿದ್ದ ಒಂದು ತಾಮ್ರ ಶಾಸನವು ಇತ್ತೀಚೆಗೆ ನನಗೆ ದೊರೆಯಿತು. ಆ ತಾಮ್ರಶಾಸನವು ೧೫ ಸೆಂ.ಮೀ. ಅಗಲ ೨೫ ಸೆಂ.ಮೀ ಉದ್ದವಾಗಿದೆ. ಅದರ ಎರಡೂ ಕಡೆಗಳಲ್ಲಿ ಅಕ್ಷರಗಳನ್ನು ಕೊರೆಯಲಾಗಿದೆ. ಮೊದಲ ಭಾಗದಲ್ಲಿ ೩೩ ಸಾಲುಗಳು ಹಾಗೂ ಎರಡನೆಯ ಭಾಗದಲ್ಲಿ ೧೦ ಸಾಲುಗಳಿವೆ. ಶಾಸನದ ಮೇಲ್ಭಾಗದಲ್ಲಿ ಸೂರ್ಯ ಹಾಗೂ ಚಂದ್ರರ ಚಿತ್ರಗಳಿವೆ. ಕೊನೆಯಲ್ಲಿ ಶ್ರೀ ನಾರಸಿಂಹಾ ಎಂಬ ಒಪ್ಪವಿದೆ

ಈ ತಾಮ್ರಶಾಸನದ ಲಿಪಿ ಹಾಗೂ ಭಾಷೆ ತೆಲುಗು. ಕಾಲ ಶಕ ವರ್ಷ ೧೬೪೭ ಕ್ರೋಧಿನಾಮ ಸಂವತ್ಸರ, ಕಾರ್ತಿಕ ಶುದ್ಧ ೧೨. ಅಂದರೆ ಕ್ರಿ.ಶ.೧೭೨೫, ಅಕ್ಟೋಬರ್ ೧೮ ಭಾನುವಾರಕ್ಕೆ ಸರಿಹೊಂದುತ್ತದೆ. ಈ ಶಾಸನವು ಕೋಲಾರದ ಕಡೆಯ ಬಾಗೇಪಲ್ಲಿ, ಕಂದಕೂರು, ಗೋರಂಟಲ, ಮುಂತಾದ ಪ್ರದೇಶಗಳನ್ನು ಆಳುತ್ತಿದ್ದ ಗುಮ್ಮನಾಯಕನ ಪಾಳೆಯದ ಪಾಳೆಯಗಾರರಾದ ಕದಿರಪ್ಪ ನಾಯಕನ ಮಗನಾದ ನಾರಸಿಂಹ ನಾಯಕರು ನೀಡಿದ ದಾನದ ವಿವರಗಳನ್ನು ನೀಡುತ್ತದೆ.

**ಶಾಸನ ಪಾಠ**

**ಮೊದಲನೆಯ ಭಾಗದ ಬರಹ.**

೧. ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹ

೨. ನ ಶಕವರ್ಷಂಬ್ಬುಲು ೧೬೪೭ ಅಗುನ ನೇಟಿ

೩. ಕ್ರೋಧಿ ನಾಮಸಂವ್ವತ್ಸರ ಕಾರ್ತಿಕ ಶುದ್ಧ

೪. ೧೨ ಪುಣ್ಯಕಾಲ ಮಂದ್ದು ಶ್ರೀಮದ್ವೇದ ಮಾರ್ಗಪ್ರ

೫. ತಿಷ್ಠಾಪನಾ ಚಾರ್ಯುಲಯಿನವುಭಯ ವೇದಾಂತಾ

೬. ಚಾರ್ಯುಲಯಿನ ಆತ್ರೇಯ ಗೋತ್ರ ಪವಿತ್ರುಲಯಿನ

೭. ಯಜುಶ್ಯಾಖಾಧ್ಯಯುಲಯಿನ ಕೊಳ್ಳಾರು ವೆಂಕ್ಕ

೮. ಟಾದ್ರಯ್ಯಂಗಾರಿ ಪೌತ್ರುಲಯಿನ ತಿರುಮಲಾ ಚಾ

೯. ರ್ಯುಲಯ್ಯವಾರ್ಲಿ ಪುತ್ರುಲಯಿನ ವೆಂಕಟಾಚಾರ್ಯುಲ

೧೦. ಯ್ಯವಾರ್ಲ್ಲಕು ಶ್ರೀಮನ್ಮಹಾ ನಾಯಂಕಾ ಚಾರ್ಯುಲಯಿ

*ನಂ.೫/೧, ೬ನೇ ಅಡ್ಡರಸ್ತೆ, ಆಜಾದ್ ನಗರ, ಬೆಂಗಳೂರು ೫೬೦೦೧೮,

೧೧. ನ ಅಚ್ಯುತ ಗೋತ್ರ ಪವಿತ್ರುಲಯಿನ ಧನುಶ್ಯಾಖಾಧ್ಯ
೧೨. ಯುಲಿಯಿನ ಗುಂಮ್ಮಿನಾಯನಿ ಕದಿರಪ್ಪ ನಾಯನಿ
೧೩. ಮ್ಮಾ ನಾಯನಿವಾರಿ ಪೌತ್ರುಲಯಿನ ಕದಿರಪ್ಪ ನಾಯನಿ
೧೪. ವಾರಿ ಪುತ್ರುಲಯಿನ ನಾರಸಿಂಹನಾಯನಿವಾರು ಸಮ
೧೫. ರ್ಪಿಂಚ್ಚಿನ ಗ್ರಾಮ ಭೂದಾನ ಧರ್ಮ ತಾಮ್ರಶಾಸನ ಕ್ರಮ ಮೆಲ್ಲ
೧೬. ನ್ನನು ಮಾ ನಾಯಂಕಾನಕೂ ಚೆಲ್ಲೆ ಬಾಗೆಪಲ್ಲೆ ಸ್ಥಳಂ
೧೭. ಊ ನಡುಸ್ತಾವುನ್ನ ದಾಸಯಗಾರಿಪಲ್ಲೆನು ಇಂದ್ಮುರಾ
೧೮. ಚವಾರಿಪಲ್ಲೆ ಚೆರುವು ಕಿಂದ್ದ ನೀರಾರಂಭಂ ಮಡಿ
೧೯. ೩/೧ ಸಹಿತಮುಗಾ ಸಹಿರಣ್ಯೋದಕ ದಾನಧಾರಾ
೨೦. ಪೂರ್ವಕಮುಗಾ ಮಾ ಇಷ್ಟ ದೈವಂ ಖಾದ್ರಿ ನೃಸಿಂಹ್ವರ್ಪಿ
೨೧. ತಮುಗಾ ಸಮರ್ಪಿಂಚ್ಚಿ ನಾರಂಗನುಕ ಇಪಲ್ಲೆಕು ಚೆಲ್ಲೆ
೨೨. ನಿಧಿ ನಿಕ್ಷೇಪ ಜಲಪಾಷಾಣ ಆಕ್ಷೀಣ ಅಗಾಮಿ ಸಿದ್ಧ
೨೩. ಸಾಧ್ಯಂ ಬ್ಬುಲಿ ನೇಟಿ ಅಷ್ಟಭೋಗ ತೇಜಸ್ಸಾಮ್ಯ ಮು
೨೪. ಲು ಫಲವೃಕ್ಷಮುಲು ಸಕಲ ಸುವರ್ಣದಾಯ
೨೫. ಮುಲು ದಾನಾಧಿ ವಿಕ್ರಯ ವಿನಿಮಯ ಭೋಗ್ಯ
೨೬. ಯೋಗ್ಯ ಮೋನಟ್ಟುಗಾನು ಆಚಂದ್ರಾರ್ಕ ಸ್ಥಾಯಿಗಾನು
೨೭. ಮೀ ಪುತ್ರ ಪೌತ್ರ ಪಾರಂಪರ್ಯಂಗಾ ಅನುಭವಿಂಚಗಲ
೨೮. ವಾರನಿತ್ರಿಪುರುಷೋದ್ದೇಶ ಮುಗಾ ತ್ರಿಕರಣ ಶುದ್ಧಿಗಾ
೨೯. ತ್ರಿವಾಚಕಂಗಾ ಸಮರ್ಪಿಂಚ್ಚಿನ ಗ್ರಾಮ ಭೂದಾನಧ
೩೦. ರ್ಮ ತಾಮ್ರ ಶಾಸನಂ || ದಾನ ಫಾಲನ ಯೋರ್ಮಧ್ಯೇ ದಾ
೩೧. ನಾ ಚ್ಛೇಯೋನು ಫಾಲನಂ | ದಾನಾತ್ಸ್ವರ್ಗ
೩೨. ಮ ವಾಪ್ನೋತಿ ಫಾಲನಾದಚ್ಯುತಂಪದಂ
೩೩. ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ |

**ಎರಡನೆಯ ಭಾಗದ ಬರಹ**

೩೪. ಪರದತ್ತಾಪ ಹಾರೇಣ ಸ್ವದತ್ತಂ ನಿಷ್ಪಲಂ ಭವೇತ್
೩೫. ಸ್ವದತ್ತಾಂಪರದತ್ತಾಂ ವಾಯೋಹರೇಚ್ಚ ವಸುಂ
೩೬. ಧರಾಂ | ಷಷ್ಠಿರ್ವರ್ಷ ಸಹಸ್ರಾಣಿ ವಿಷ್ಠಾಯಾ
೩೭. ಂ ಜಾಯತೇ ಕ್ರಿಮಿಃ | ಏಕೈವ ಭಗಿನೀ ಲೋಕೇ ಸರ್ವೆ
೩೮. ಷಾ ಮೇವ ಭೂಭುಜಾಂ | ನಭೋಜ್ಯಾನ ಕರ
೩೯. ಗ್ರಾಹ್ಯಾವಿಪ್ರದತ್ತಾವಸುಂಧರಾ | ಮದ್ವಂ

೪೦. ಶಜಾಪ್ಪರ ಮಹೀಪತಿ ವಂಶಜಾ ವಾಯೋ

೪೧. ಭೂಮಿ ಘಾಸ್ಸತತಮುಜ್ಜ್ವಲ ಧರ್ಮ ಚಿತ್ತಾಃ

೪೨. ಮದ್ಧರ್ಮ ಮೇವ ಸತತಂ ಪರಿಘಾಲಯಂತಿಃ

೪೩. ತತ್ಪಾದುಕದ್ವಯ ಮಹಂ ಶಿರಸಾನಮಾಮಿ। ಶ್ರೀ ನಾರಶಿಂಹ್ವಾ

**ಶಾಸದ ಸಾರಾಂಶಃ**

ಶಾಲಿವಾಹನ ಶಕವರ್ಷ ೧೬೪೭ ಕ್ರೋಧಿನಾಮ ಸಂವತ್ಸರ ಕಾರ್ತಿಕ ಶುಧ್ಧ ೧೨(ಅಂದರೆ ಕ್ರಿ.ಶ. ೧೭೨೪ ಅಕ್ಟೋಬರ್ ೧೮) ಭಾನುವಾರದಂದು ಶ್ರೀಮದ್ ವೇದ ಮಾರ್ಗ ಪ್ರತಿಷ್ಠಾಪನಾಚಾರ್ಯ, ಉಭಯ ವೇದಾಂತಾ ಚಾರ್ಯ, ಆತ್ರೇಯ ಗೋತ್ರ ಪವಿತ್ರನಾದ ಯಜುಶ್ಯಾಖೆಗೆ ಸೇರಿದ ಕೊಳ್ಳಾರು ವೆಂಕಟಾದ್ರಿ ಅಯ್ಯಂಗಾರಿಯ ಮೊಮ್ಮಗ ತಿರುಮಲಾಚಾರ್ಯನ ಮಗನಾದ ವೆಂಕಟಾಚಾರ್ಯರಿಗೆ ಶ್ರೀ ಮನ್ಮಹಾನಾಯಕಾಚಾರ್ಯರೂ ಅಚ್ಯುತ ಗೋತ್ರ ಧನುಶ್ಯಾಖೆಗೆ ಸೇರಿದ ಗುಮ್ಮಿನಾಯಕ ಕದಿರಪ್ಪನಾಯಕ ತಿಮ್ಮಾನಾಯಕರ ಮೊಮ್ಮಗ ಕದಿರಪ್ಪನಾಯಕನ ಮಗ ನಾರಸಿಂಹನಾಯಕರು ಸಮರ್ಪಿಸಿದ ಭೂದಾನ ಧರ್ಮ ತಾಮ್ರ ಶಾಸನದ ಕ್ರಮವೆಂತೆಂದರೆ,ನಮ್ಮ ಪಾಳೆಯಪಟ್ಟಿಗೆ ಸೇರಿದ ಬಾಗೇಪಲ್ಲಿ ಸ್ಥಳದ ದಾಸಯಗಾರಿಹಳ್ಳಿಗೆ ಸೇರಿದ ರಾಚವಾರಿಹಳ್ಳಿಯ ಕೆರೆಯ ಕೆಳಗಿರುವ ಗದ್ದೆ ೧ ಖಂಡುಗ ಬೆಳೆ ಬರುವ ಗದ್ದೆಯನ್ನು ಹಿರಣ್ಯೋದಕ ಸಹಿತವಾಗಿ, ದಾನ ಧಾರಾಪೂರ್ವಕವಾಗಿ ನಮ್ಮ ಇಷ್ಟದೈವ ಖಾದ್ರಿ ನರಸಿಂಹನಿಗೆ ಸಮರ್ಪಿಸಿದ್ದೇನೆ. ಅದಕ್ಕೆ ಸೇರಿಥ ನಿಧಿ ನಿಕ್ಷೇಪ ಜಲಪಾಷಾಣ. ಆಕ್ಷೀಣ ಅಗಾಮಿ ಸಿದ್ಧ ಸಾಧ್ಯವೂ ಸೇರಿದಂತೆ ಅದನ್ನು ದಾನ, ಮಾರಾಟ, ವಿನಿಮಯ, ಭೋಗ್ಯ ಮುಂತಾದ ಯಾವುದನ್ನು ಬೇಕಾದರೂ ಮಾಡಿಕೊಳ್ಳಬಹುದೆಂಬಂತೆ.ಆ ಚಂದ್ರಾರ್ಕ ಸ್ಥಾಯಿಯಾಗಿ ನೀವು ನಿಮ್ಮ ಪುತ್ರ, ಪೌತ್ರ ಪಾರಂಪರ್ಯವೂ ಅನುಭವಿಸಿ ಕೊಳ್ಳಬಹುದು ಎಂದು, ತ್ರಿಪುರುಷ, ತ್ರಿಕರಣ (ಮನಸ್ಸು, ಮಾತು, ಮತ್ತು ದೇಹ) ತ್ರಿವಾಚಕ (ತನು, ಮನ, ಧನ) ಪೂರ್ವಕವಾಗಿ ಸಮರ್ಪಿಸಿದರು. ಮುಂದೆ ಶಾಪಾಶಯಗಳಿವೆ. ಕೊನೆಯಲ್ಲಿ ನಾರಸಿಂಹಾ ಎಂದು ನಾರಸಿಂಹನಾಯಕರ ಬಪ್ಪ ಅಂದರೆ (ಹಸ್ತಾಕ್ಷರ)ಸಹಿ ಇದೆ.

**ಐತಿಹಾಸಿಕ ಅಂಶಗಳು.**

ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ಗುಮ್ಮಿನಾಯಕನ ಪಾಳೆಯಗಾರರು ಬಾಗೇಪಲ್ಲಿ, ಗೋರಂಟಲ, ಕಂದಕೂರು ಮುಂತಾದ ಪ್ರಾಂತ್ಯಗಳನ್ನು ಆಳುತ್ತಿದ್ದರು. ಈ ಪಾಳೆಯ ಪಟ್ಟಿನ ರಾಜಧಾನಿ ಕಲ್ಯಾಣನಗರವೆಂದು ಹೆಸರಾಗಿತ್ತು. ಈ ಪಾಳೆಯಗಾರರ ವಂಶದಲ್ಲಿ ಒಟ್ಟು ೨೫ಜನ ಪಾಳಯಗಾರರು ಸುಮಾರು ೫೬೦ ವರ್ಷಗಳ ಕಾಲ ಕ್ರಿ.ಶ.೧೨೪೩ ರಿಂದ ೧೮೦೩ರ ವರೆಗೆ ಆಳ್ವಿಕೆ ನಡೆಸಿದರೆಂದು ತಿಳಿಯುತ್ತದೆ. ಈ ವಂಶದ ೪ನೆಯ ಪಾಳೆಯಗಾರನಾದ ಗುಮ್ಮಿನಾಯಕನ ಕಾಲದಿಂದ ಇವರು ವಿಜಯ ನಗರದ ಮಾಂಡಳಿಕರಾಗಿ ಆಳ್ವಿಕೆ ನಡಸಿದರು. ಈ ವಂಶದ ಏಳನೆಯ ದೊರೆಯಾದ ಹಿರೀಕದಿರಪ್ಪ ನಾಯಕನ ಕಾಲದಲ್ಲಿ. ಈ ಪಾಳೆಯಕ್ಕೆ ಒಂದು ಸಂಸ್ಥಾನದ ಗೌರವ ಲಭಿಸಿತು. ವಿಜಯನಗರದ ಪತನಾನಂತರದ ಕಾಲದಲ್ಲಿ ಈ ಪಾಳಯವು ಹೈದರಾಬಾದ್‌ನ ನಿಜಾಮ, ಮರಾಠರು, ಮೈಸೂರ್‌ನ ಹೈದರಾಲಿ, ನಂತರ ಬ್ರಿಟೀಷರು ಮುಂತಾದವರ ಆಕ್ರಮಣ ಕ್ಕೊಳಗಾಗಿ ಸಂಪೂರ್ಣವಾಗಿ ಹರಿದು ಹಂಚಿ ಹೋಯಿತು.

ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ದಾಸಯಗಾರಿ ಪಲ್ಲಿ, ರಾಚವಾರಿಪಲ್ಲಿ, ಮುಂತಾದ ಊರುಗಳನ್ನು ಈಗಲೂ ನಾವು ಬಾಗೇಪಲ್ಲಿಯ ಬಳಿ ನೋಡಬಹುದು. ಈ ಶಾಸನದ ಪ್ರಕಾರ ದಾನವನ್ನು ಪಡೆದ ವೆಂಕಟಾಚಾರ್ಯರ ವಂಶಜರು ಈಗಲೂ ದಾಸಯಗಾರಿ ಪಲ್ಲಿಯಲ್ಲಿದ್ದಾರೆ. ಅವರು ತಮ್ಮ ಪೂರ್ವಿಕರು ದಾನವಾಗಿ ಪಡೆದಿದ್ದ ಗದ್ದೆಯನ್ನು ನಂಜುಂಡ ರೆಡ್ಡಿಯವರಿಗೆ ಮಾರಿದಾಗ, ಈ ತಾಮ್ರ ಶಾಸನವನ್ನೂ ಸಹ ಕೊಟ್ಟಿದ್ದರಿಂದ ಆ ಶಾಸನವು ನಂಜುಂಡರೆಡ್ಡಿಯವರ ಬಳಿಯಲ್ಲಿ ಸೇರಿತೆಂಬುದಾಗಿ ತಿಳಿದುಬರುತ್ತದೆ.

(ನನ್ನ ಅಧ್ಯಯನಕ್ಕಾಗಿ ತಾಮ್ರಶಾಸನವನ್ನು ನೀಡಿದ ಶ್ರೀ ನಂಜುಂಡ ರೆಡ್ಡಿಯವರಿಗೆ ಮತ್ತು ಶಾಸನ ಪರಿಷ್ಕರಿಸುವಲ್ಲಿ ನೆರವು ನೀಡಿದ ಎಂ. ಜಿ. ಮಂಜುನಾಥ್‌ರವರಿಗೆ ನನ್ನ ಕೃತಜ್ಞತೆಗಳು).